KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೨ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೧, ೨೦೦೭ (ಆಶ್ವಯುಜ ೧೯, ಶಕ ವರ್ಷ ೧೯೨೯) | ಸಂಚಿಕೆ ೪೧ |
|---|---|---|



## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**WATER RESOURCES DEPARTMENT**
**(Minor Irrigation)**
**ಸಂಖ್ಯೆ:ಸನೀಇ 04 ಮಸಾವಿ 2007, ದಿನಾಂಕ: 18ನೇ ಸೆಪ್ಟೆಂಬರ್ 2007**
**STATE TENDER BULLETIN**

The details of the notices inviting the tender in respect of the Procurement requirements of different procurement entities to be published as a part of the Stater - Tender Bulletin for the 4th week of sept 2007. The details of the published Tender Notificationmay be obtained from the concerned Executive Engineers who has invited the Tender.

**V. GOVINDARAJ**
State Tender Bulletin Officer and Deputy Secretary to
Government Water Resources Department (M.I.)

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ (ದ್ವಿ-ಲಕೋಟೆ ಪದ್ಧತಿ)**

**ಟೆಂಡರ್ ಪ್ರಕಟಣೆ ಸಂಖ್ಯೆ:03/2007-08, ದಿನಾಂಕ: 13ನೇ ಸೆಪ್ಟೆಂಬರ್ 2007**

**ಸಂ: ಕಾಪಾಇಂ:ಸನೀವಿ:ಶಿ:ಸಇಂ-3:4702-ಟೆಂಡರ್:ಸೇತುವೆಗಳು:2007-08:1468 ದಿನಾಂಕ: 13ನೇ ಸೆಪ್ಟೆಂಬರ್ 2007**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಅರ್ಹ ದರ್ಜೆ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಅನ್ನು ದ್ವಿ-ಲಕೋಟೆ ಪದ್ಧತಿಯಲ್ಲಿ, ದ್ವಿ ಪ್ರತಿಗಳಲ್ಲಿ ಮೊಹರು ಮಾಡಲಾದ ಹಾಗೂ ಕಾಮಗಾರಿಯ ಹೆಸರನ್ನು ಸ್ಪಷ್ಟವಾಗಿ ಮೇಲೆ ನಮೂದಿಸಲಾದ ಲಕೋಟೆಯಲ್ಲಿ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-1999, 2000 ಮತ್ತು ಆ್ಯಕ್ಟ್-2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ, ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1. ಗುತ್ತಿಗೆದಾರರು ತಾಂತ್ರಿಕ ಬಿಡ್‌ಅನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2. ಗುತ್ತಿಗೆದಾರರು ಆರ್ಥಿಕ ಬಿಡ್‌ಅನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಲಕೋಟೆ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ, ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದ

ಕಾರ್ಯಾಲಯದಲ್ಲಿ ಈ ಕೆಳಗೆ ಸೂಚಿಸಿದ ದಿನಾಂಕದಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್ ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರ್‌ದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ದಿನಾಂಕವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದೂ ಅರ್ಥೈಸಿಕೊಳ್ಳತಕ್ಕದ್ದು.

ತಾಂತ್ರಿಕ ಬಿಡ್‌ಅನ್ನು ಮೊದಲು (ಸಾಧ್ಯವಾದರೆ ಟೆಂಡರ್ ಸ್ವೀಕರಿಸುವ ದಿನಾಂಕದಂದೇ) ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ಲಿಖಿತವಾಗಿ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹವಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ, ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

1. ಟೆಂಡರ್ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 06.10.2007ರ ಸಂಜೆ 5.00 ಗಂಟೆಯವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ಕೊನೆಯ ದಿನಾಂಕ: 11.10.2007ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 17.10.2007 ರ ಸಂಜೆ 4.00 ಗಂಟೆ ಒಳಗೆ ಸಲ್ಲಿಸುವುದು
(ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ)

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್ ಮೊತ್ತ (ರೂ. ಗಳಲ್ಲಿ) | ಈ.ಎಂ.ಡಿ. ಮೊತ್ತ (ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ (ಹಿಂದಿರುಗಿಸಲಾರ ದಂಥದ್ದು) ತೆರಿಗೆ ಸೇರಿ (ರೂ. ಗಳಲ್ಲಿ) | ಗುತ್ತಿಗೆದಾರರ ದರ್ಜೆ | ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|---|
| 1. | ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾ॥ ಹೊಸಮುಗುಳಗೆರೆ ಹತ್ತಿರ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ನಿರ್ಮಾಣ | 1,16,85,294/- | 1,17,000/- | 15,000/- | 1ನೇ ದರ್ಜೆ | 10 ತಿಂಗಳು |
| 2. | ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾ॥ ಹಳೇಗೊದ್ದನಕೊಪ್ಪ ಹತ್ತಿರ ಕುಮುದ್ವತಿ ನದಿಗೆ ಅಡ್ಡಲಾಗಿ ಬ್ರಿಡ್ಜ್ ನಿರ್ಮಾಣ | 1,16,85,294/- | 1,17,000/- | 15,000/- | 1ನೇ ದರ್ಜೆ | 10 ತಿಂಗಳು |

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಸಲುವಾಗಿ ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ ಪರಿಶೀಲನೆಗೊಳಪಡಿಸಿ, ಅರ್ಜಿಯೊಂದಿಗೆ ನಕಲು ಪ್ರತಿಗಳನ್ನು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರೆನ್ಸ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯ ಕ್ಲಿಯರೆನ್ಸ ಪ್ರಮಾಣ ಪತ್ರ.
4. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳನ್ನು ಹೊಂದಿರಬೇಕು.
5. ಅಂಚೆ ಮೂಲಕ ಟೆಂಡರ್ ಪಡೆಯಬೇಕಾದಲ್ಲಿ ಟೆಂಡರ್ ಫಾರಂ ಬೆಲೆಗೆ ರೂ. 200.00 ಹೆಚ್ಚುವರಿಯಾಗಿ ಸೇರಿಸತಕ್ಕದ್ದು. ಅಂಚೆ ವಿಳಂಬ ಅಥವಾ ಖಾಲಿ ಟೆಂಡರ್ ಅರ್ಜಿದಾರರನ್ನು ಅಂಚೆ ಮೂಲಕ ತಲುಪುವ ಖಾತರಿಯನ್ನು ಈ ಇಲಾಖೆ ನೀಡುವುದಿಲ್ಲ.

**ಖಾಲಿ ಟೆಂಡರ್ ಫಾರಂಗಳಿಗೆ ಹಣ ಸಂದಾಯ ಮಾಡುವ ವಿಧಾನ:-**

ಡಿ.ಡಿ. ಅಥವಾ ಬ್ಯಾಂಕ್‌ನ ಚೆಕ್‌ನ್ನು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು.

**ಇ.ಎಂ.ಡಿ. ಸಲ್ಲಿಸುವ ವಿಧಾನ:-**

ನಿಗದಿತ ಇ.ಎಂ.ಡಿ. ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ಎಫ್.ಡಿ.ಆರ್ ಅಥವಾ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸಬಹುದು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸಿದ್ದೇ ಆದಲ್ಲಿ ಗುತ್ತಿಗೆದಾರರು ಅವುಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರಬೇಕು. ಇ.ಎಂ.ಡಿ ಯನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ ಎಫ್.ಡಿ.ಆರ್ ರೂಪದಲ್ಲಿ ಸಲ್ಲಿಸಿದರೆ, ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿರಬೇಕು. ಇ.ಎಂ.ಡಿ ಯನ್ನು ಟೆಕ್ನಿಕಲ್ ಬಿಡ್‌ನ ಲಕೋಟೆಯಲ್ಲಿ ಲಗತ್ತಿಸಿರಬೇಕು. ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿ ಪರಿಗಣಿಸುವುದಿಲ್ಲ. ಇ.ಎಂ.ಡಿ ಮಾನ್ಯತೆ, ಟೆಂಡರ್ ಸ್ವೀಕರಿಸಿದ ದಿನಾಂಕದಿಂದ 180 ದಿನಗಳ ಅವಧಿಗೆ ಹೊಂದಿರಬೇಕು.

**ತಾಂತ್ರಿಕ (ಟೆಕ್ನಿಕಲ್) ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:-**

1. ಇ.ಎಂ.ಡಿ.
2. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3 ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳ ವಿವರಗಳು.
3. ತಾಂತ್ರಿಕ ಬಿಡ್‌ನಲ್ಲಿರುವ ನಮೂನೆ (1) ರಿಂದ (8) ಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ದೃಢೀಕರಿಸಬೇಕು.

ಇ.ಎಂ.ಡಿ ರಹಿತ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.

**ಆರ್ಥಿಕ ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:-**

1. ಶೆಡ್ಯೂಲ್-ಬಿ ಯನ್ನು ದ್ವಿ-ಪ್ರತಿಯಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ದರಗಳನ್ನು ಹಾಗೂ ಈ ದರಗಳನ್ನು ಟೆಂಡರ್ ಪರಿಮಾಣದೊಂದಿಗೆ ಗುಣಿಸಿದಲ್ಲಿ ಒದಗುವ ಮೊತ್ತವನ್ನು ನಮೂದಿಸಿದಂತೆ ಸಲ್ಲಿಸಬೇಕು. ಯಾವುದೇ ತಿದ್ದುಪಡಿ ಮಾಡಿರುವುದನ್ನು ಗುತ್ತಿಗೆದಾರರು ಸಹಿಯೊಂದಿಗೆ ದೃಢೀಕರಿಸಬೇಕು.
2. ಪಿ.ಡಬ್ಲ್ಯೂ.ಜಿ-65 ಮತ್ತು 66 ಇವುಗಳನ್ನು ಹಾಗೂ ಇದರ ಅಡಕಗಳನ್ನು ಯಾವುದೇ ವಿವರಗಳಿಗಾಗಿ ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ಎಲ್ಲಾ ಪುಟಗಳ ಮೇಲೂ ಸಹಿ ಮಾಡಿರಬೇಕು.

**ಷರತ್ತುಗಳು:-**

1. ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪ್ರತಿ ಲಗತ್ತಿಸತಕ್ಕದ್ದು.
2. ಟೆಂಡರ್ ಪಡೆಯಲು ಅರ್ಹತೆಯಾಗಿ ಪ್ರತಿಯೊಬ್ಬ ಗುತ್ತಿಗೆದಾರರು ಕಳೆದ ಐದು ವರ್ಷಗಳಲ್ಲಿ.......
   ಅ. ಕನಿಷ್ಠ ಎರಡು ಆರ್ಥಿಕ ವರ್ಷಗಳಲ್ಲಿ ಟೆಂಡರ್‌ಗಿಡಲಾದ ಅಂದಾಜು ಮೊತ್ತದ ಶೇ. 200 ರಷ್ಟಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ತರಹದ ಸಿವಿಲ್ ಕಾಮಗಾರಿಗಳ ನಿರ್ಮಾಣ) ವಾರ್ಷಿಕ ವಹಿವಾಟು ಮಾಡಿರಬೇಕು.
   ಆ. ಇದೇ ತರಹದ, ಟೆಂಡರ್‌ಗಿಡಲಾದ ಅಂದಾಜು ಮೌಲ್ಯಕ್ಕೆ ಶೇ. 50 ರಷ್ಟಕ್ಕೆ ಕಡಿಮೆ ಇಲ್ಲದಂತೆ ಕನಿಷ್ಠ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ಮುಗಿಸಿರಬೇಕು.
   ಇ. ಯಾವುದೇ ಒಂದು ವರ್ಷದಲ್ಲಿ ಈ ಕೆಳಗೆ ಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| ಕ್ರ. ಸಂ. | ಕೆಲಸದ ವಿವರ | ಕನಿಷ್ಠ ಪರಿಮಾಣಗಳು |
|---|---|---|
| 1 | ಅಗೆತದ ಕೆಲಸ (ಘ.ಮೀ) | 1,000.00 |
| 2 | ಮಣ್ಣಿನ ಒಡ್ಡು (ಘ.ಮೀ) | 5,000.00 |
| 3 | ಸರಳು ಸಹಿತ ಮತ್ತು ಸರಳ ರಹಿತ ಕಾಂಕ್ರೀಟ್ ಕೆಲಸ (ಘ.ಮೀ) | 1,500.00 |

3. ಅರ್ಜಿದಾರರು ಪ್ರದರ್ಶಿಸಬೇಕಾಗಿರುವುದು..
   ಅ) ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿರಬೇಕು (ಸ್ವಂತ ಅಥವಾ ಲೀಸ್ ಮೇಲೆ), ಲೀಸ್ ಆಗಿದ್ದಲ್ಲಿ ಜಿ.ಪಿ.ಎ ಹಾಗೂ ಮೂಲ ದಾಖಲಾತಿ ಒದಗಿಸಬೇಕು.

√ ಎಕ್ಸವೇಟರ್/ ಪೋಕ್ಲೇನ್ (0.90 ಘ.ಮೀ ಸಾಮರ್ಥ್ಯ) 1 ಸಂ.
√ ಲಾರಿಗಳು/ಟಿಪ್ಪರ್‌ಗಳು 3 ಸಂ.
√ ಕಾಂಕ್ರೀಟ್ ಮೆಷಿನ್ ಮಿಕ್ಸರ್ (10/7 ಘ.ಅ ಸಾಮರ್ಥ್ಯ) 4 ಸಂ.
√ ವೈಬ್ರೇಟರ್ 4 ಸಂ.
√ ಪಂಪ್ ಸೆಟ್ (5 ಹೆಚ್.ಪಿ) 2 ಸಂ.
√ ಪಂಪ್ ಸೆಟ್ (10 ಹೆಚ್.ಪಿ) 2 ಸಂ.
√ ಸೆಂಟ್ರಿಂಗ್ ಸಾಮಾಗ್ರಿಗಳು (ಕಾಂಕ್ರೀಟ್ ಕೆಲಸಕ್ಕೆ) 100 ಘ.ಮೀ ಪ್ರತಿ ದಿನಕ್ಕೆ

ಆ) ಇಂತಹದೇ ಯೋಜನೆ ನಿರ್ಮಾಣದ ಕನಿಷ್ಠ 5 ವರ್ಷ ಅನುಭವವುಳ್ಳ ಒಬ್ಬ ಸಿವಿಲ್ ಇಂಜಿನಿಯರಿಂಗ್ ಪದವಿ ಹೊಂದಿದ ಪ್ರಾಜೆಕ್ಟ್ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ತಾಂತ್ರಿಕ ಪರಿಣಿತರನ್ನು ಹೊಂದಿರಬೇಕು. ಪಂಪಿಂಗ್ ಮೆಷಿನರಿ ಕೆಲಸವನ್ನು ಪರಿಣಿತರಿಂದ ಮಾಡಿಸಬೇಕು.

ಇ) ಈ ಯೋಜನೆಗೆ ಬೇಕಾದ ಸಂಪನ್ಮೂಲ ಚರಾಸ್ಥಿ ಮತ್ತು / ಅಥವಾ ಬ್ಯಾಂಕ್ ಕ್ರೆಡಿಟ್ ರೂಪದಲ್ಲಿ ಕನಿಷ್ಠ ರೂ. 130.00 ಲಕ್ಷಗಳ ಲಭ್ಯತೆ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್/ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು).

4. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಾಗ್ರಿಗಳನ್ನು ಗುತ್ತಿಗೆದಾರರೇ ಒದಗಿಸತಕ್ಕದ್ದು ಮತ್ತು ಇಲಾಖಾ ವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ. ಗುತ್ತಿಗೆದಾರರು ಭಾರತೀಯ ಮಾನಕ ಸಂಸ್ಥೆಯ ಗುಣಮಟ್ಟದ ಸಾಮಾಗ್ರಿಗಳನ್ನು ಉಪಯೋಗಿಸಬೇಕು. ಸಾಮಾಗ್ರಿಗಳ ಗುಣಮಟ್ಟವನ್ನು ಸಕ್ಷಮ ಗುಣನಿಯಂತ್ರಣ ಪ್ರಾಧಿಕಾರದವರಿಂದ ಪರೀಕ್ಷೆ ಮಾಡಿಸಿ ಗುಣಮಟ್ಟದ ಬಗ್ಗೆ ಪ್ರಮಾಣ ಪತ್ರ ಒದಗಿಸತಕ್ಕದ್ದು.
5. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.
6. ಸತತವಾಗಿ ಮೂರು ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
7. ಕಾಮಗಾರಿಯನ್ನು ಉಪ-ಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
8. ಈ ವಿಭಾಗದಲ್ಲಿ ಹಿಂದೆ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸದ ಗುತ್ತಿಗೆದಾರರಿಂದ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.
9. ಗುತ್ತಿಗೆದಾರರು ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು ಕೆಲಸ ನಿರ್ವಹಿಸಲಾದ ಕುರಿತಾದ ಪ್ರಮಾಣ ಪತ್ರವನ್ನು ಕಾರ್ಯಪಾಲಕ ಇಂಜಿನಿಯರ್ ದರ್ಜೆಗೆ ಕಡಿಮೆ ಇರದ ಅಧಿಕಾರಿಯವರಿಂದ ಪಡೆದಂತೆ ಲಗತ್ತಿಸತಕ್ಕದ್ದು.

10. ರಾಜ್ಯ ಮಾರಾಟ ತೆರಿಗೆಯಲ್ಲಿ ನೋಂದಣಿ ಸೂಚಿಸಿರುವ ಬಗ್ಗೆ ನೋಂದಣಿ ಪ್ರತಿ ಹಾಗೂ ಆದಾಯ ತೆರಿಗೆ ತೀರುವಳಿ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.
11. ಷರತ್ತುಗಳನ್ನೊಳಗೊಂಡ ಟೆಂಡರ್‌ನ್ನು ಪರಿಗಣಿಸುವುದಿಲ್ಲ.
12. ಟೆಂಡರ್ ಪ್ರಕಟಣೆಯಲ್ಲಿ ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು/ತಿಳಿಸಲಾಗುವುದು.
13. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಒಪ್ಪಿಕೊಳ್ಳುವ ಸಕ್ಷಮ ಪ್ರಾಧಿಕಾರ ಕಾಯ್ದಿರಿಸಿಕೊಂಡಿರುತ್ತದೆ ಹಾಗೂ ಅತೀ ಕನಿಷ್ಠ ಟೆಂಡರನ್ನೇ ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ಇರುವುದಿಲ್ಲ.
14. ತಾಂತ್ರಿಕ ಬಿಡ್‌ನಲ್ಲಿ ವಿವರಗಳನ್ನು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.
15. ಅಂದಾಜು ದರಗಳ ಶೇ. 75 ಕ್ಕಿಂತ ಕಡಿಮೆ ದರವನ್ನು ಟೆಂಡರ್ ದರವಾಗಿ ನಮೂದಿಸಿದಲ್ಲಿ ಅಷ್ಟು ಮೊತ್ತಕ್ಕೆ "ಅಡಿಷನಲ್ ಪರ್‌ಫಾರ್ಮೆನ್ಸ್ ಸೆಕ್ಯೂರಿಟಿ" ಯನ್ನು ಯಶಸ್ವಿ ಗುತ್ತಿಗೆದಾರರು ಸಲ್ಲಿಸತಕ್ಕದ್ದು.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

**ಬಿ.ಹೆಚ್. ಯೋಗೇಶ್**
ಕಾರ್ಯಪಾಲಕ ಇಂಜಿನಿಯರ್
ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ.

ಪಿ.ಆರ್. 604

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76

### ಟೆಂಡರ್ ಪ್ರಕಟಣೆ

**ಸಂ:ತೋಇ:ಜೀವತಾ:ತೋಉನಿ:ಅಂಕೃ:ಸತೋಅ1:30A:2007-2008, ದಿನಾಂಕ: 27ನೇ ಆಗಸ್ಟ್ 2007**

ಬಯೋಟೆಕ್ನಾಲಜಿ ಕೇಂದ್ರ ಹುಳಿಮಾವು, ಬೆಂಗಳೂರು-76 ಹಾಗೂ ಬೆಳಗಾಂಗಳಲ್ಲಿ ಸ್ಥಾಪಿಸಲಾಗಿರುವ ವಿವಿಧ ಪ್ರಯೋಗಶಾಲೆಗಳಿಗೆ 2007-2008ನೇ ಸಾಲಿನಲ್ಲಿ ಅಗತ್ಯವಿರುವ ಯಂತ್ರೋಪಕರಣಗಳು, ಗ್ರೋತ್ ರೂಂ ರ‍್ಯಾಕ್‌ಗಳು, ಡಿಸ್‌ಪ್ಲೇ/ಪ್ರದರ್ಶನ ಸಾಮಗ್ರಿಗಳು ಹಾಗೂ ಮುದ್ರಣ ಸಾಮಗ್ರಿಗಳನ್ನು ಸರಬರಾಜು ಮಾಡುವ ಬಗ್ಗೆ ವಿವಿಧ ಸಂಸ್ಥೆಗಳು, ಗುತ್ತಿಗೆದಾರರು ಹಾಗೂ ಸರಬರಾಜುದಾರರಿಂದ ಮೊಹರಾದ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಸದರಿ ಪ್ರತಿಯೊಂದು ಪ್ರಯೋಗಶಾಲಾ ಯಂತ್ರೋಪಕರಣಗಳ/ಸಾಮಾಗ್ರಿಗಳ ವೆಚ್ಚವನ್ನು ಪ್ರತ್ಯೇಕ ಟೆಂಡರುಗಳಲ್ಲಿ ನಮೂದಿಸಬೇಕು. ಟೆಂಡರ್ ಫಾರಂಗಳು, ನಿಬಂಧನೆಗಳು ಮತ್ತು ಇತರೆ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ, ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ದಿನಾಂಕ:09.10.2007 ರಿಂದ 18.10.2007ರ ಸಂಜೆ 5.00 ಗಂಟೆಯ ಒಳಗೆ ಪಡೆಯಬಹುದು.

ಟೆಂಡರ್ ಫಾರಂನ ಮೊತ್ತ ರೂ.500/- ಮೊಹರಾದ ಟೆಂಡರುಗಳ ಮೇಲೆ ಯಾವ ಯಂತ್ರೋಪಕರಣಗಳ ಅಥವಾ ಸಾಮಾಗ್ರಿಗಳ ಖರೀದಿ ಬಗ್ಗೆ ಟೆಂಡರು ಎಂದು ಪ್ರತ್ಯೇಕವಾಗಿ ನಮೂದಿಸಿ ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76 ರವರಿಗೆ ದಿನಾಂಕ:19.10.2007ರ 2.00 ಗಂಟೆಯ ಒಳಗೆ ಅಂಚೆ ಅಥವಾ ಮುದ್ದಾಂ ಕಳುಹಿಸುವುದು. ಟೆಂಡರುಗಳನ್ನು ಅದೇ ದಿನ ಸಂಜೆ 4.00 ಘಂಟೆಗೆ ಬಯೋಟೆಕ್ನಾಲಜಿ ಕೇಂದ್ರದ ಆವರಣದಲ್ಲಿ ತೆರೆಯಲಾಗುವುದು.

ತೋಟಗಾರಿಕೆ ನಿರ್ದೇಶಕರು

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ನಿರ್ದೇಶನಾಲಯ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76

### ಟೆಂಡರ್ ಪ್ರಕಟಣೆ

**ಸಂ:ತೋಇ:ಜೀವತಾ:ತೋಉನಿ:ಅಂಕೃ:ಸತೋಅ1:30A:2007-2008, ದಿನಾಂಕ: 27ನೇ ಆಗಸ್ಟ್ 2007**

2007-08ನೇ ಸಾಲಿಗೆ ಬಯೋಟೆಕ್ನಾಲಜಿ ಕೇಂದ್ರಗಳು, ಹುಳಿಮಾವು, ಬೆಂಗಳೂರು ಹಾಗೂ ಬೆಳಗಾಂನಲ್ಲಿರುವ ವಿವಿಧ ಪ್ರಯೋಗಶಾಲೆಗಳಿಗೆ ಅಗತ್ಯವಿರುವ ಪ್ರಯೋಗಶಾಲಾ ಉಪಕರಣ/ಸಾಮಗ್ರಿಗಳ ಬಗ್ಗೆ ವಿವರಗಳು.

| ಸಂಖ್ಯೆ | ವಿವರಗಳು | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್ ಫಾರಂ ಮೊತ್ತ | ಟೆಂಡರ್ ಫಾರಂ ನೀಡುವ ದಿನಾಂಕ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ | ಟೆಂಡರ್ ತೆರೆಯುವ ದಿನಾಂಕ |
|---|---|---|---|---|---|---|
| 1 | ಥರ್ಮಲ್ ಸೈಕ್ಲರ್ | 3.50 | 500.00 | | | |
| 2 | ಯು.ವಿ. ವಿಸಿಬಲ್ ಸ್ಪೆಕ್ಟ್ರೋಫೋಟೋಮೀಟರ್ | 3.50 | 500.00 | | | |
| 3 | ವಾಕ್-ಇನ್-ಕೂಲರ್ | 4.00 | 500.00 | | | |
| 4 | ಡೀಜಲ್ ಜನರೇಟರ್ | 10.00 | 500.00 | 09.10.2007 ರಿಂದ 18.10.2007 | 19.10.2007 ಮಧ್ಯಾಹ್ನ 2.00 ಗಂಟೆಯವರೆಗೆ | 19.10.2007 ಸಂಜೆ 4.00 ಗಂಟೆಗೆ |

| ಸಂಖ್ಯೆ | ವಿವರಗಳು | ಅಂದಾಜು ಮೊತ್ತ (ಲಕ್ಷ ರೂ.ಗಳಲ್ಲಿ) | ಟೆಂಡರ್ ಫಾರಂ ಮೊತ್ತ | ಟೆಂಡರ್ ಫಾರಂ ನೀಡುವ ದಿನಾಂಕ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ | ಟೆಂಡರ್ ತೆರೆಯುವ ದಿನಾಂಕ |
|---|---|---|---|---|---|---|
| 5 | ಸೀಡ್ ಎಕ್ಸ್ಟ್ರಾಕ್ಷನ ಮತ್ತು ಸೀಡ್ ಡ್ರೈಯಿಂಗ್ ಉಪಕರಣ | 4.00 | 500.00 | | | |
| 6 | ಅಂಗಾಂಶ ಕೃಷಿ ಪ್ರಯೋಗಾಲಯದ ಗ್ರೋತ್ ರೂಂ ರ್ಯಾಕ್‌ಗಳು | 20.00 | 500.00 | | | |
| 7 | ಡಿಸ್ ಪ್ಲೇ/ಪ್ರದರ್ಶನದ ಸಾಮಗ್ರಿಗಳು | 4.00 | 500.00 | | | |
| 8 | ಪ್ರಿಂಟಿಂಗ್ ಮತ್ತು ಪಬ್ಲಿಶಿಂಗ್ ಕೆಲಸಗಳು | 4.00 | 500.00 | | | |

ತೋಟಗಾರಿಕೆ ನಿರ್ದೇಶಕರು

**ತೋಟಗಾರಿಕೆ ಇಲಾಖೆ**
**ತೋಟಗಾರಿಕೆ ನಿರ್ದೇಶನಾಲಯ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76**
**ಟೆಂಡರ್ ನಿಯಮಾವಳಿಗಳು**
**ಸಂ:ತೋಇ:ಜೀವತಾ:ತೋಉನಿ:ಅಂಕೃ:ಸತೋಅ1:30A:2007-2008, ದಿನಾಂಕ: 27ನೇ ಆಗಸ್ಟ್ 2007**

1. ಟೆಂಡರ್ ಫಾರಂ ಬೆಲೆ ರೂ. 500/- ಮಾತ್ರ ಟೆಂಡರ್ ಫಾರಂನ್ನು ಈ ಕಛೇರಿಯಲ್ಲಿ ಹಣ ನೀಡಿ ಪಡೆಯಬಹುದು. ಟೆಂಡರ್ ಫಾರಂ ಹಣ ಹಿಂತಿರುಗಿಸಲಾಗುವುದಿಲ್ಲ. ಪ್ರತಿಯೊಂದು ಯಂತ್ರೋಪಕರಣಕ್ಕೂ/ಪರಿಕರಕ್ಕೆ ಪ್ರತ್ಯೇಕವಾಗಿ ಟೆಂಡರ್ ಅರ್ಜಿ ಸಲ್ಲಿಸಬೇಕು.
2. ಟೆಂಡರ್ ಫಾರಂನ್ನು ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಮಾತ್ರ ಕೊಡಲಾಗುತ್ತದೆ. ವಿ.ಪಿ.ಪಿ. ಮುಖಾಂತರ ಕಳುಹಿಸಿಕೊಡಲಾಗುವುದಿಲ್ಲ.
3. ಟೆಂಡರ್ ಫಾರಂ ದಿನಾಂಕ: 09.10.2007 ರಿಂದ 18.10.2007 ರ ಸಂಜೆ 5.00 ರ ವರೆಗೆ ಮಾತ್ರ ನೀಡಲಾಗುವುದು. ಮೊಹರು ಮಾಡಿದ ಟೆಂಡರನ್ನು ವಾಪಾಸ್ಸು ನೀಡಲು ಅಂತಿಮ ದಿನಾಂಕ19.10.2007 ಮಧ್ಯಾಹ್ನ 2.00 ಗಂಟೆಯವರೆಗೆ ಮಾತ್ರ.
4. ಟೆಂಡರನ್ನು ದಿನಾಂಕ:19.10.2007 ರಂದು ಸಂಜೆ 4.00 ಗಂಟೆಗೆ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು ಇಲ್ಲಿ ತೆರೆಯಲಾಗುವುದು.
5. ಸದರಿ ಟೆಂಡರಿನಲ್ಲಿ ಪ್ರಕಟಿಸಿರುವ ಪ್ರಯೋಗಶಾಲಾ ಯಂತ್ರೋಪಕರಣಗಳು/ಗ್ರೋತ್ ರೂಂ ರ್ಯಾಕ್‌ಗಳು/ ಡಿಸ್ ಪ್ಲೇ ಬೋರ್ಡುಗಳು/ಮುದ್ರಣ ಸಾಮಾಗ್ರಿಗಳನ್ನು ಸರಬರಾಜು ಮಾಡುವ ಬಗ್ಗೆ ತಾಂತ್ರಿಕ ವಿವರಣೆಗಳನ್ನು ಹಾಗೂ ಸರಬರಾಜು ನಿಬಂಧನೆಗಳ ಪೂರ್ಣ ವಿವರಣೆಗಳನ್ನು ಸದರಿ ಕಛೇರಿಯಲ್ಲಿ ಪಡೆಯಬಹುದು.
6. ತೆರಿಗೆ ಮತ್ತು ಅಬ್ಕಾರಿ ಶುಲ್ಕವನ್ನು ಸ್ಪಷ್ಟವಾಗಿ ನಮೂದಿಸುವುದು. ಪ್ಯಾಕಿಂಗ್ ಚಾರ್ಜ್, ಸಾಗಾಣಿಕೆ ವೆಚ್ಚ, ವಿಮೆ ಎಲ್ಲವನ್ನು ಸೇರಿಸಿ ತಗಲುವ ಕನಿಷ್ಠ ದರವನ್ನು ನಮೂದಿಸುವುದು.
7. ಟೆಂಡರುದಾರರು ನಿರ್ಧಿಷ್ಟ ಯಂತ್ರೋಪಕರಣಕ್ಕೆ ಟೆಂಡರನ್ನು ಸಲ್ಲಿಸುವಾಗ ತಾಂತ್ರಿಕ ಹಾಗೂ ಆರ್ಥಿಕ ಬಿಡ್ಡುಗಳನ್ನು ಪ್ರತ್ಯೇಕ ಲಕೋಟೆಗಳಲ್ಲಿ ಸಲ್ಲಿಸುವುದು. ತಾಂತ್ರಿಕ ನಿಬಂಧನೆಗಳನ್ನು ಪೂರೈಸಿದ ನಂತರವೇ ಆರ್ಥಿಕ ಬಿಡ್ಡನ್ನು ತೆರೆಯಲಾಗುವುದು. ಇಲ್ಲವಾದಲ್ಲಿ ಸದರಿ ಟೆಂಡರನ್ನು ತಿರಸ್ಕರಿಸಲಾಗುವುದು.
8. ಟೆಂಡರುದಾರರು ನಮೂದಿಸುವ ಯಂತ್ರೋಪಕರಣಗಳ ಖರೀದಿಗೆ ಯಂತ್ರೋಪಕರಣ/ ಗ್ರೋತ್ ರೂಂ ರ್ಯಾಕಿನ ಶೇ.2 ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಹುಂಡಿಯ ಮುಖಾಂತರ ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬೆಂಗಳೂರು ರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು.
9. ಟೆಂಡರ್‌ದಾರರು ನಮೂದಿಸುವ ಡಿಸ್‌ಪ್ಲೇ ಬೋರ್ಡುಗಳು/ ಮುದ್ರಣ ಸಾಮಗ್ರಿಗಳ ಖರೀದಿಗೆ ರೂ. 2000/- ಮೊತ್ತದ ಇ.ಎಂ.ಡಿ. ಮೊಬಲಗನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಹುಂಡಿಯ ಮುಖಾಂತರ ತೋಟಗಾರಿಕೆ ಉಪ ನಿರ್ದೇಶಕರು, ಅಂಗಾಂಶ ಕೃಷಿ, ಬೆಂಗಳೂರು ರವರ ಹೆಸರಿನಲ್ಲಿ ಟೆಂಡರ್ ಅರ್ಜಿಯೊಂದಿಗೆ ಸಲ್ಲಿಸಬೇಕು. ಇ.ಎಂ.ಡಿ. ಲಗತ್ತಿಸದೇ ಇರುವ ಟೆಂಡರು ಅರ್ಜಿಗಳನ್ನು ತಿರಸ್ಕರಿಸಲಾಗುವುದು.
10. ಟೆಂಡರ್ ಅನುಮೋದಿತ ಸಂಸ್ಥೆಯು ಯಂತ್ರೋಪಕರಣದ ಉಳಿದ ಶೇ. 3 ರಷ್ಟು ಮೊತ್ತದ ಇ.ಎಂ.ಡಿ. ಮೊಬಲಗನ್ನು ಸದರಿ ಅಧಿಕಾರಿಯವರ ಹೆಸರಿನಲ್ಲಿ ಖರೀದಿ ಆದೇಶ/ಕಾರ್ಯಾದೇಶ ನೀಡುವ ಮುನ್ನ ನೀಡಬೇಕು.
11. ಸಂಸ್ಥೆಯವರು ತಮ್ಮ ಆದಾಯ ತೀರುವಳಿ ದೃಢೀಕರಣ ಪತ್ರವನ್ನು (ಅಂತಿಮವಾಗಿ ಸಲ್ಲಿಸಿರುವ) ಟೆಂಡರ್ ಜೊತೆಯಲ್ಲಿ ಸಲ್ಲಿಸುವುದು ಹಾಗೂ ಆದಾಯ ಇಲಾಖೆ ವತಿಯಿಂದ ನೀಡಿರುವ PAN/TAN ಪ್ರತಿಯನ್ನು ಲಗತ್ತಿಸುವುದು.
12. ಯಾವುದೇ ಕಾರಣ ನೀಡದೇ ಟೆಂಡರ್ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳಸಹಿದಾರರಿಗೆ ಕಾಯ್ದಿರಿಸಲಾಗಿದೆ.
13. ಸಾಮಗ್ರಿಗಳ ಪೂರೈಕೆಯನ್ನು ಆದೇಶ ನೀಡಿದ 30 ದಿನಗಳಲ್ಲಿ ಸರಬರಾಜು ಮಾಡಿದ ನಂತರ ಸಾಮಾಗ್ರಿಗಳ/ಯಂತ್ರೋಪಕರಣಗಳ ಕಾರ್ಯಕ್ಷಮತೆ ಹಾಗೂ ಗುಣ ಮಟ್ಟದ ಬಗ್ಗೆ ತೃಪ್ತಿಯಾದ ಮೇಲೆ ಹಣ ಬಿಡುಗಡೆ ಮಾಡಲಾಗುವುದು.
14. ಸರ್ಕಾರದ ನಿಯಮಾವಳಿಗಳ ಪ್ರಕಾರ ಸರಬರಾಜುದಾರರ ಹಾಗೂ ಗುತ್ತಿಗೆದಾರರ ಮೂಲ ಬಿಲ್ಲಿನಲ್ಲಿಯೇ ಆದಾಯ ತೆರಿಗೆ 2.3% ಯನ್ನು ಕಟಾವು ಮಾಡಲಾಗುವುದು.

15. ಆದಾಯ ತೆರಿಗೆ ಪ್ರಮಾಣ ಪತ್ರವನ್ನು ಟೆಂಡರ್ ಫಾರಂ ಜೊತೆ ಲಗತ್ತಿಸುವುದು.
16. ಮೇಲ್ಕಂಡ ಷರತ್ತುಗಳಿಗೆ ಬದ್ದರಾಗಿರುವುದರ ಬಗ್ಗೆ ಮುಚ್ಚಳಿಕೆ ಪತ್ರವನ್ನು ಸ್ಟ್ಯಾಂಪ್ ಪೇಪರಿನಲ್ಲಿ ಬರೆದುಕೊಡುವುದು.

ತೋಟಗಾರಿಕೆ ನಿರ್ದೇಶಕರು

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು-76**

**ಸಂ:ತೋಇ:ಜೀವತಾ:ತೋಉನಿ:ಅಂಕೃ:ಸತೋಅ1:30A:2007-2008, ದಿನಾಂಕ: 27ನೇ ಆಗಸ್ಟ್ 2007**

2007-08ನೇ ಸಾಲಿಗೆ ಬಯೋಟೆಕ್ನಾಲಜಿ ಕೇಂದ್ರಗಳು, ಹುಳಿಮಾವು, ಬೆಂಗಳೂರು ಹಾಗೂ ಬೆಳಗಾಂನಲ್ಲಿರುವ ವಿವಿಧ ಪ್ರಯೋಗಶಾಲೆಗಳಿಗೆ ಅಗತ್ಯವಿರುವ ಪ್ರಯೋಗಶಾಲಾ ಉಪಕರಣ/ಸಾಮಗ್ರಿಗಳ ಬಗ್ಗೆ ವಿವರಗಳು.

1. ಯಂತ್ರೋಪಕರಣಗಳು
   ಅ) ಥರ್ಮಲ್ ಸೈಕ್ಲರ್
   ಆ) ಯು.ವಿ. ವಿಸಿಬಲ್ ಸ್ಪೆಕ್ಟ್ರೋಫೋಟೋಮೀಟರ್
   ಇ) ವಾಕ್-ಇನ್-ಕೂಲರ್
   ಈ) ಡೀಜಲ್ ಜನರೇಟರ್
   ಉ) ಸೀಡ್ ಎಕ್ಸ್ಟ್ರಾಕ್ಷನ್ ಮತ್ತು ಸೀಡ್ ಡ್ರೈಯಿಂಗ್ ಉಪಕರಣ.
   ಊ) ಅಂಗಾಂಶ ಕೃಷಿ ಪ್ರಯೋಗಾಲಯದ ಗ್ರೋತ್ ರೂಂ ರ್ಯಾಕ್‌ಗಳು.
2. ಡಿಸ್ ಪ್ಲೇ/ಪ್ರದರ್ಶನದ ಸಾಮಗ್ರಿಗಳು.
3. ಪ್ರಿಂಟಿಂಗ್ ಮತ್ತು ಪಬ್ಲಿಶಿಂಗ್ ಕೆಲಸಗಳು.

ಪಿ.ಆರ್. 605 ತೋಟಗಾರಿಕೆ ನಿರ್ದೇಶಕರು

**ಲೋಕೋಪಯೋಗಿ ಇಲಾಖೆ**

**ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**(ಎರಡು ಲಕೋಟೆ ಪದ್ಧತಿಯಲ್ಲಿ)**

**ನಂ.ಇಎನ್‌ಹೆಚ್/ಚಿ/ಸ.ಇ-2/ಟೆಂ.ಪ್ರ./ರಾ.ಹೆ/13/2007-08/2464, ದಿನಾಂಕ: 18ನೇ ಸೆಪ್ಟೆಂಬರ್ 2007**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೊಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ದಿನಾಂಕ:29.10.2007 ರಂದು ಸಾಯಂಕಾಲ 4.00 ಗಂಟೆಯವರೆಗೆ ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66 ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರು ಕರೆ ಸಂಖ್ಯೆ :: ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1. | ರಾಷ್ಟ್ರೀಯ ಹೆದ್ದಾರಿ - 13 ಸೊಲ್ಲಾಪುರ್-ಮಂಗಳೂರು ಸೆಕ್ಷನ್‌ನ ರ ಕಿ.ಮೀ. 335 ರಿಂದ 355 ರವರೆಗೆ ರಸ್ತೆ ಮೇಲ್ಮೈ ಅಭಿವೃದ್ಧಿ ಕಾಮಗಾರಿ. | ರೂ. 323.00 | ರೂ. 3,23,000/- | ರೂ. 30,000+ 12.50% ವ್ಯಾಟ್ | ಡಬ್ಲ್ಯೂ.ಬಿ.ಎಂ. ಬಿ.ಎಂ. ಮತ್ತು ಎಸ್.ಡಿ.ಬಿ.ಸಿ. ಮತ್ತು ವೈರಿಗಳ ನಿರ್ಮಾಣದ ಕಾಮಗಾರಿ | 6 ತಿಂಗಳು ಮಳೆಗಾಲ ಸಹಿತ |

**ಷರತ್ತುಗಳು:** 1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೊಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲೀಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ಕಾರ್ಯನಿರ್ವಾಹಕ ಇಂಜಿನಿಯರ್‌ಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**2) ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ.**

| | | | |
|---|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಹಾಗೂ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ದಿನಾಂಕ: | : | 27.10.2007 ರವರೆಗೆ (ಕಛೇರಿ ವೇಳೆಯಲ್ಲಿ) |
| ಆ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | : | 29.10.2007 ಮಧ್ಯಾಹ್ನ 4.00 ಗಂಟೆಯವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | : | 29.10.2007 ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |
| ಉ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | : | ತಾಂತ್ರಿಕ ಬಿಡ್‌ಗಳಿಗೆ ಅನುಮೋದನೆ ದೊರೆತ ತಕ್ಷಣ. |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು**

1. ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ:ಎಫ್.ಡಿ.ಆರ್.: ಪೇ ಆರ್ಡರ್ : ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ.66 ದಕ್ಕೆ ಅನುಗುಣವಾಗಿರತಕ್ಕದ್ದು.
2. ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀತಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು : ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ : ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು, ಇ.ಎಂ.ಡಿ. : ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.
3. ಕರ್ನಾಟಕ ಸರ್ಕಾರದ ಆದೇಶದ ಸಂಖ್ಯೆ:ಎಲ್‌ಡಿ/300/ಎಲ್‌ಇಟಿ/2006 ಬೆಂಗಳೂರು ದಿನಾಂಕ: 18.01.2007 ಮತ್ತು ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ:ಲೋಇ/134/ಬಿಎಂಎಸ್/2007 ದಿನಾಂಕ: 27.07.2007ರನ್ವಯ ಗುತ್ತಿಗೆದಾರರಿಗೆ ಪಾವತಿಮಾಡುವ ಮೊತ್ತದ ಮೇಲೆ ಶೇಕಡ 1 ರಂತೆ ಕರ್ನಾಟಕ ರಾಜ್ಯ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಅಭಿವೃದ್ಧಿ ನಿಧಿಗಾಗಿ ಗುತ್ತಿಗೆದಾರ ಬಿಲ್ಲು ಮೊತ್ತದ ಮೇಲೆ ಕಟಾಯಿಸಿ ಸದರಿ ನಿಧಿಗೆ ಜಮಾ ಮಾಡಲಾಗುವುದು.
4. ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲೀಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು, ಮೇಲಿನ ಮಾಲೀಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 1. | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. & ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್ : ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2. | ಪೇವರ್ ಫಿನಿಷರ್ | ಒಂದು (1) | - ಸದರಿ - |
| 3. | ವೈಬ್ರೇಟರಿ ರೋಲರ್ | ಒಂದು (1) | - ಸದರಿ - |
| 4. | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | - ಸದರಿ - |

| ಕ್ರ. ಸಂ. | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲೀಕತ್ವದ ಪುರಾವೆಗಳು |
|---|---|---|---|
| 5. | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | - ಸದರಿ - |
| 6. | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್ |
| 7. | ಎಕ್ಸ್‌ವೇಟರ್ | ಒಂದು (1) | ಮಾಲೀಕತ್ವದ ಪ್ರಮಾಣ ಪತ್ರ |
| 8. | ಕಾಂಕ್ರೀಟ್ ಮಿಕ್ಸರ್‌ಗಳು | ಎರಡು (2) | ಖರೀದಿಸಿದ ಇನ್‌ವಾಯ್ಸ್ : ಸೆಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 9. | ವೈಬ್ರೇಟರ್‌ಗಳು | ಎರಡು (2) | - ಸದರಿ - |

1. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30 ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30 ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
2. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ "ಲೈನ್ ಆಫ್ ಕ್ರೆಡಿಟ್‌ಅನ್ನು" ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗಧಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. "ಲೈನ್ ಆಫ್ ಕ್ರೆಡಿಟ್‌ಅನ್ನು" ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
3. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್‌ಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
4. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು : ಏಜೆನ್ಸಿಗಳು : ಸಂಸ್ಥೆಯ ಪ್ರೊಫೈಲ್ ಅನ್ನು ಲಗತ್ತಿಸತಕ್ಕದ್ದು.
5. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
6. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
7. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
8. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯಪಾಲಕ ಅಭಿಯಂತರು,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

ಪಿ.ಆರ್. 606

**ಸಾರ್ವಜನಿಕ ಶಿಕ್ಷಣ ಉಪನಿರ್ದೇಶಕರ ಕಛೇರಿ, ಕೋಲಾರ ಜಿಲ್ಲೆ, ಕೋಲಾರ**

**ತಿದ್ದುಪಡಿ**

**ಸಂಖ್ಯೆ:ಸಿಬ್ಬಂದಿ2.ಪ್ರಾ.ಶಾ.ಶಿಕ್ಷಕರ ನೇಮಕ 07/2007-08, ದಿನಾಂಕ: 22ನೇ ಸೆಪ್ಟೆಂಬರ್ 2007**

2007-08ನೇ ನಡೆದ ಕೋಲಾರ ಜಿಲ್ಲೆಯಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಸಹಶಿಕ್ಷಕ: ಶಿಕ್ಷಕರ ವೃಂದದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಸಂಯುಕ್ತ ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಆಯ್ಕೆ ಮಾಡಲು ದಿನಾಂಕ:30.07.2007ರ ನೇಮಕಾತಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪ್ರಪತ್ರದಲ್ಲಿ ದಿನಾಂಕ:30.07.2007ರ ನೇಮಕಾತಿ ಅಧಿಸೂಚನೆಯನ್ನು ಕರ್ನಾಟಕ ರಾಜ್ಯ ಪ್ರಪತ್ರದಲ್ಲಿ ದಿ:31.07.2007ರಂದು ಪ್ರಕಟಿಸಲಾಗಿದೆ.

ಕೋಲಾರ ಜಿಲ್ಲೆಯಲ್ಲಿ ಖಾಲಿ ಇರುವ ಉರ್ದು ಸಾಮಾನ್ಯ ಶಿಕ್ಷಕರಿಗೆ ಸಂಬಂಧಿಸಿದಂತೆ ಮಾಲೂರು ತಾಲ್ಲೂಕಿನಲ್ಲಿ ಎರಡು (02) ಹುದ್ದೆಗಳು ಖಾಲಿ ಇದ್ದು ಇದರಲ್ಲಿ ಒಂದು ಹುದ್ದೆ ಪ್ರವರ್ಗ-1ರಲ್ಲಿ ಇತರೆ ಅಭ್ಯರ್ಥಿಗೆ ಮತ್ತು ಇನ್ನೊಂದು ಹುದ್ದೆ 2ಎ ಇತರೆ ಅಭ್ಯರ್ಥಿಗೆ ಮೀಸಲಿರಿಸಿದೆ. ಎಂದು ಅಧಿಸೂಚನೆಯಲ್ಲಿ ಪ್ರಕಟವಾಗಿದೆ. ಆದರೆ ಮೇಲ್ಕಂಡ ಎರಡು ಹುದ್ದೆಗಳಲ್ಲಿ ಒಂದು ಹುದ್ದೆ ಸಾಮಾನ್ಯ ವರ್ಗದ ಗ್ರಾಮೀಣ ಅಭ್ಯರ್ಥಿಗೆ (ಜಿಎಂ ರೂರಲ್) ಮತ್ತು ಮತ್ತೊಂದು ಹುದ್ದೆ ಪ್ರವರ್ಗ-1 ವರ್ಗದ ಇತರೆ ಅಭ್ಯರ್ಥಿಗೆ (ಸಿ1 ಒಟಿ) ಮೀಸಲಾಗಿರುತ್ತದೆ. ಆದ್ದರಿಂದ ಮಾಲೂರು ತಾಲ್ಲೂಕಿನಲ್ಲಿ ಖಾಲಿ ಇರುವ ಉರ್ದು ಸಾಮಾನ್ಯ ಶಿಕ್ಷಕರ ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ಸಾಮಾನ್ಯ ವರ್ಗದ ಗ್ರಾಮೀಣ (ಜಿ ಎಂ ರೂರಲ್) ಮತ್ತು ಮತ್ತೊಂದು ಹುದ್ದೆಯನ್ನು ಪ್ರವರ್ಗ-1 ವರ್ಗದ ಇತರೆ ಎಂದು (ಸಿ1-ಒಬಿ) ಎಂದು ಓದಿಕೊಳ್ಳತಕ್ಕದ್ದು.

**ಸಿ. ನಾಗರಾಜನ್**
ಉಪನಿರ್ದೇಶಕರು, ಸಾ.ಶಿ.ಇ.
ಕೋಲಾರ ದಕ್ಷಿಣ ಜಿಲ್ಲೆ, ಕೋಲಾರ.

ಪಿ.ಆರ್. 607

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು,

ಸಂಖ್ಯೆ:ತೋಉನಿ/ಕಉ/ವಿನಿ2/71/2007–08, ದಿನಾಂಕ:10ನೇ ಸೆಪ್ಟೆಂಬರ್ 2007.

## ಟೆಂಡರ್ ಪ್ರಕಟಣೆ

**ವಿಷಯ:–** ಕಬ್ಬನ್‌ಉದ್ಯಾನವನದ ರಸ್ತೆಗಳಲ್ಲಿ ಕಸ ಕಡ್ಡಿ ಹಾಗೂ ಮರದ ಕೆಳಗೆ ಬಿದ್ದಿರುವ ಎಲೆಗಳು ಹಾಗೂ ಪ್ಲಾಸ್ಟಿಕ್ ಚೀಲ ಇತ್ಯಾದಿ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವ ಬಗ್ಗೆ.

ಕಬ್ಬನ್ ಉದ್ಯಾನವನ ಹಾಗೂ ಸುತ್ತ ಮುತ್ತಲಿನ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಕಸ ಗುಡಿಸಿ ಸ್ವಚ್ಛತೆ ಮಾಡಿಸಲು 2007–08 ನೇ ಸಾಲಿಗೆ ಟೆಂಡರ್‌ನ್ನು ಆಹ್ವಾನಿಸಲಾಗಿದೆ. ಇಚ್ಚಿಸುವವರು ಪ್ರತಿ ಮಾಹೆಗೆ ತಗಲುವ ವೆಚ್ಚ ದರ ಸೂಚಿಸಲು ತಿಳಿಸಿದೆ.

| ವಿವರಗಳು | ವಿಸ್ತೀರ್ಣ | ಮಾಹೆಯಾನ |
|---|---|---|
| ಕಬ್ಬನ್ ಉದ್ಯಾನವನದಲ್ಲಿ ಬರುವ ರಸ್ತೆಗಳು ಅನುಬಂಧ–1 ರಲ್ಲಿ ತಿಳಿಸಿರುವ ವಿವರಗಳಂತೆ ಕಸ ಕಡ್ಡಿಗಳನ್ನು ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ಸ್ವಚ್ಛ ಮಾಡುವುದು. ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸೆಂಚುರಿ ಕ್ಲಬ್ ಹತ್ತಿರ ಎಲೆ ಕಸ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಗುಡಿಸಿ ತೆಗೆಸುವುದು. | ಅನುಬಂಧ – 1 ರಲ್ಲಿ ನಮೂದಿಸಿದಂತೆ | |

1. ಟೆಂಡರ್ ಫಾರಂಗಳನ್ನು ಪಡೆಯುವ ದಿನಾಂಕ ಃ 15.10.2007 ರಿಂದ 17.10.2007 ರ ಸಂಜೆ 5.00 ಗಂಟೆಯವರೆಗೆ
2. ಮೊಹರಾದ ಟೆಂಡರ್‌ಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ ಃ 18.10.2007 ಸಂಜೆ 4.00 ಗಂಟೆಯವರೆಗೆ
3. ಟೆಂಡರ್‌ಗಳನ್ನು ತೆರೆಯುವ ದಿನಾಂಕ ಃ 18.10.2007 ಸಂಜೆ 5.00 ಗಂಟೆಗೆ
4. ಟೆಂಡರ್ ಫಾರಂ ಬೆಲೆ ಃ ರೂ. 500–00 (ಐದು ನೂರು ಮಾತ್ರ)

ಹೆಚ್ಚಿನ ಮಾಹಿತಿಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ ಬೆಂಗಳೂರು ರವರ ಕಛೇರಿಯಲ್ಲಿ ಕಛೇರಿ ವೇಳೆಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

**ನಿಬಂಧನೆ ಮತ್ತು ಷರತ್ತುಗಳುಃ–**

1 ಟೆಂಡರ್ ಫಾರಂನ್ನು ದಿನಾಂಕ:15.10.2007 ರಿಂದ 17.10.2007 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್ ಫಾರಂ ಬೆಲೆ ರೂ. 500=00

2 ಟೆಂಡರ್ ಜೊತೆಯಲ್ಲಿ ರೂ. 50,000=00 ಗಳ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಬೇಕು. ಡಿಮ್ಯಾಂಡ್ ಡ್ರಾಫ್ಟ್‌ನ್ನು ಸದಸ್ಯ ಕಾರ್ಯದರ್ಶಿಗಳು, " ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಲಾಲ್‌ಬಾಗ್ ಬೆಂಗಳೂರು ರವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದಿರಬೇಕು.

3 ಮೊಹರಾದ ಟೆಂಡರ್‌ಗಳನ್ನು ದಿನಾಂಕ:18.10.2007 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು ನಿಗದಿಯಾದ ವೇಳೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

4 ಮೊಹರಾದ ಟೆಂಡರ್‌ಗಳನ್ನು ದಿನಾಂಕ: 18.10.2007 ರಂದು ಸಂಜೆ 5.00 ಗಂಟೆಗೆ ಕೆಳಸಹಿದಾರರ ಕಛೇರಿಯಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣ ಅಧಿಕಾರವು ತೋಟಗಾರಿಕೆ ನಿರ್ದೇಶಕರದೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು.

5 ಟೆಂಡರ್‌ಗಳನ್ನು ಕೊಡುವಾಗ ಸೀಲ್ ಮಾಡಿರಬೇಕು ಮತ್ತು ಲಕೋಟೆಯ ಮೇಲೆ ಕಬ್ಬನ್ ಉದ್ಯಾನವನದ ರಸ್ತೆಗಳನ್ನು ಗುತ್ತಿಗೆ ಆಧಾರದ ಮೇಲೆ ಸ್ವಚ್ಛತೆ ಮಾಡಿಸುವ ಬಗ್ಗೆ ಟೆಂಡರ್ ಎಂದು ಬರೆದಿರಬೇಕು.

6 ಟೆಂಡರ್ ಜೊತೆಯಲ್ಲಿ ಠೇವಣಿ ಹಣ ರೂ. 50,000=00 ಗಳ ಡಿ.ಡಿ. ಇಲ್ಲದಿದ್ದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

7 ಕಬ್ಬನ್ ಉದ್ಯಾನವನದ ಒಳಗಡೆ (ಅನುಬಂಧ–1 ರಲ್ಲಿ ಲಗತ್ತಿಸಿದ ವಿವರದ ರೀತಿ) ಇರುವ ರಸ್ತೆಗಳನ್ನು ಪ್ರತಿನಿತ್ಯ ಹೊರ ಮತ್ತು ಒಳಗೆ ಸ್ವಚ್ಛವಾಗಿ ಗುಡಿಸಬೇಕು ಇದಕ್ಕೆ 20 ಜನ ಕೆಲಸಗಾರರನ್ನು ನೇಮಕಾತಿ ಮಾಡಿ, ನೇಮಕಾತಿ ಮಾಡಿದ ವಿವರಗಳನ್ನು ಸಂಬಂಧಿಸಿದ ಗುತ್ತಿಗೆದಾರರು ಸಹಾಯಕ ತೋಟಗಾರಿಕೆ ಅಧಿಕಾರಿ, ಕಬ್ಬನ್‌ಉದ್ಯಾನವನ ಹಾಗೂ ಶೇಷಾದ್ರಿ ವಿಭಾಗ ರವರ ಪರಿಶೀಲನೆಗೆ ಒದಗಿಸಬೇಕು. ಹಾಗೂ ಅವರಿಂದ ಪ್ರತಿ ತಿಂಗಳು ತೃಪ್ತಿಕರಣ ದೃಢೀಕರಣ ಪಡೆಯತಕ್ಕದ್ದು.

8 ಕಬ್ಬನ್‌ಉದ್ಯಾನವನದಲ್ಲಿ ಬರುವ ಸಿದ್ದಲಿಂಗಯ್ಯ ಸರ್ಕಲ್, ಸೆಂಟ್ರಲ್ ಲೈಬ್ರರಿ ಸರ್ಕಲ್, ಗೋಪಾಲಗೌಡ ಸರ್ಕಲ್, ಸಂಚುರಿ ಕ್ಲಬ್ ಹತ್ತಿರ ಹಾಗೂ ಅನುಬಂಧ–1 ರಲ್ಲಿ ವಿವರಿಸಿದ ರಸ್ತೆಗಳಲ್ಲಿ ಸ್ವಚ್ಛತೆ ಹಾಗೂ ಮರದ ಕೆಳಗೆ ಹಾಗೂ ಹುಲ್ಲುಹಾಸಿನ ಮೇಲೆ ಬಿದ್ದಿರುವ ಕಸ ಕಡ್ಡಿಗಳನ್ನು ನಿಗದಿಪಡಿಸಿದ ಕಾಂಪೋಸ್ಟ್ ಗುಂಡಿಗೆ ಸಾಗಿಸಬೇಕು. ಹಾಗೂ ಪ್ಲಾಸ್ಟಿಕ್ ಚೀಲ ಇತರೆ ತ್ಯಾಜ್ಯ ವಸ್ತುಗಳನ್ನು ಸ್ವಂತ ವಾಹನದಲ್ಲಿ ದೂರ ಸಾಗಿಸಬೇಕು.

9 ಈ ಗುತ್ತಿಗೆ ಕೆಲಸವನ್ನು ನಿರ್ವಹಿಸಿದ 2 ವರ್ಷದ ಅವಧಿಗೆ ದೃಢೀಕರಣ ಪತ್ರವನ್ನು ನೀಡಬೇಕು.

10 ಟೆಂಡರ್‌ದಾರರು ಟ್ರಿಪರ್ ಲಾರಿ ಅಥವಾ ಟ್ರ್ಯಾಕ್ಟರ್ ಹೊಂದಿರತಕ್ಕದ್ದು ಮತ್ತು ವಾಹನದ ದಾಖಲೆಗಳ ಜೆರಾಕ್ಸ್ ಪ್ರತಿಗಳನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು.

11 ಕಳೆದ ಸಾಲಿನ ಆದಾಯದ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.

12 ಕನಿಷ್ಠ 5.00 ಲಕ್ಷಗಳ ಬ್ಯಾಂಕ್ ಸಾಲ್ವೆನ್ಸಿ ಲಗತ್ತಿಸಿರಬೇಕು,

13 ಯಶಸ್ವಿ ಟೆಂಡರ್ ದಾರರು ವಾರ್ಷಿಕ ಗುತ್ತಿಗೆ ಕೆಲಸವನ್ನು ನಿರ್ವಹಿಸಲು ನಮೂದಿಸಿದ ಟೆಂಡರ್ ಮೊತ್ತವನ್ನು 12 ಸಮ ಕಂತುಗಳಲ್ಲಿ ಪ್ರತಿ ತಿಂಗಳು ಕೆಲಸ ತೃಪ್ತಿಕರವಾಗಿ ನಿರ್ವಹಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು ಹಾಗೂ ನಿಯಮದಂತೆ ಸಾಲದ ಬಿಲ್ಲಿನಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು.

14 ಯಶಸ್ವಿ ಟೆಂಡರ್ ದಾರರು ಗುತ್ತಿಗೆ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ಒಪ್ಪಿರುವ ಬಗ್ಗೆ ರೂ. 200=00 ಛಾಪಾ ಕಾಗದದ ಮೇಲೆ ಕರಾರು ಬರೆದು ಕೊಡಬೇಕು.

15 ಈ ಕಛೇರಿಯಿಂದ ಸದರಿ ಗುತ್ತಿಗೆಯನ್ನು ನಿರ್ವಹಿಸಲು ಆದೇಶ ಪಡೆದ ದಿನಾಂಕದಿಂದ ನಿಗಧಿತ ಅವಧಿಯ ನಂತರ ಯಾವುದೇ ಕಾರಣಕ್ಕೂ ಗುತ್ತಿಗೆಯ ಅವಧಿಯನ್ನು ಮುಂದುವರಿಸಲು ಸಾಧ್ಯವಿರುವುದಿಲ್ಲ.

16 ಸದರಿ ಗುತ್ತಿಗೆ ಕೆಲಸವನ್ನು ಕಳಪೆಯಾಗಿ ನಿರ್ವಹಣೆ ಮಾಡಿದಲ್ಲಿ ಮೊದಲ ಬಾರಿಗೆ ಶೇ. 5 ರಂತೆ ನಂತರ ಶೇ. 10, ಶೇ. 15 ರಂತೆ ಬಿಲ್ಲಿನಲ್ಲಿ ಕಡಿತಗೊಳಿಸಲಾಗುವುದು ಹಾಗೂ ಗುತ್ತಿಗೆ ಕರಾರನ್ನು ರದ್ದುಪಡಿಸಿ, ಠೇವಣೆಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಕಾನೂನಿನಡಿಯಲ್ಲಿ ಕ್ರಮ ಜರುಗಿಸಿ ದಂಡ ವಿಧಿಸಲಾಗುತ್ತದೆ.

17 ಕೆಲಸ ತೃಪ್ತಿಕರವಾಗಿಲ್ಲದಿದ್ದಲ್ಲಿ ಗುತ್ತಿಗೆಯ ಅವಧಿಯನ್ನು ಯಾವುದೇ ಕಾರಣ ನೀಡದೇ ತೋಟಗಾರಿಕೆ ನಿರ್ದೇಶಕರು ರದ್ದುಪಡಿಸುವ ಅಧಿಕಾರ ಹೊಂದಿರುತ್ತಾರೆ.

18 ತೋಟಗಾರಿಕೆ ನಿರ್ದೇಶಕರು, ತೋಟಗಾರಿಕೆ ಉಪ ನಿರ್ದೇಶಕರು, ತುರ್ತು ಸಂದರ್ಭದಲ್ಲಿ ಸ್ವಚ್ಛತೆ ಬಗ್ಗೆ ನೇಮಿಸುವ ಕೆಲಸವನ್ನು ಸಹ ನಿರ್ವಹಿಸುವುದು.

19 ಮಹಾನಗರ ಪಾಲಿಕೆಯಿಂದ ಸದರಿ ಸ್ವಚ್ಛತಾ ಕೆಲಸವನ್ನು ಪ್ರಾರಂಭ ಮಾಡಿದ ದಿನದಂದೇ ಆದೇಶವು ತಾನಾಗಿಯೇ ರದ್ದಾಗುತ್ತದೆ. ಎಂದು ಭಾವಿಸತಕ್ಕದ್ದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

**ANNEXURE**

**DETAILS OF CUBBON PARK ROADS FOR CLEANING**

| Sl. No. | Name of the Road | Classification | Width of the Road | Length of the Road | Footpath width | |
|---|---|---|---|---|---|---|
| | | | | | Left side | Right side |
| 1) | KGID Road to Dr.Ambedkar Road | B.T. | 9.15 Mtrs | 155.00 Mtrs | 3.30 Mtrs | 2.90 Mtrs. |
| 2) | Hudson circle to Library | B.T. | 8.75 Mtrs | 1222.0 Mtrs | 2.10 Mtrs | 2.10 Mtrs. |
| 3) | In front of K.G.I.D. | B.T. | 5.90 Mtrs | 310.00 Mtrs | 2.30 Mtrs | 3.50 Mtrs. |
| 4) | Library to Fountain | B.T. | 6.40 Mtrs | 210.00 Mtrs | 1.50 Mtrs. | 1.50 Mtrs. |
| 5) | Fountain to Siddalingaiah circle | B.T. | 7.40 Mtrs | 280.00 Mtrs | 3.40 Mtrs. | 3.40 Mtrs. |
| 6) | Ring Road Circle | B.T. | 9.25 Mtrs | 290.00 Mtrs | - | - |
| 7) | High Court to Fairy Fountain. | B.T. | 9.40 Mtrs. | 458.00 Mtrs | 2.00 Mtrs. | - |
| 8) | Small Fountain to Museum | B.T. | 19.60 Mtrs. | 280.00 Mtrs | 2.00 Mtrs. | 2.00 Mtrs. |
| 9) | Library to Junction of Siddalingaiah circle | B.T. | 7.25 Mtrs | 425.00 Mtrs | 1.80 Mtrs | 2.20 Mtrs |
| 10) | K.R. Circle to Library | B.T. | 7.50 Mtrs. | 325.00 Mtrs. | 2.00 Mtrs. | 2.00 Mtrs. |
| 11) | In front of K.G.S.Club | B.T. | 7.50 Mtrs. | 580.00 Mtrs. | | 1.25 Mtrs. |
| 12) | Rani park road to CTO circle | B.T. | 8.35 Mtrs. | 590.00 Mtrs. | 2.80 Mtrs. | 3.00 Mtrs. |
| 13) | CTO Circle to High Court | B.T. | 7.75 Mtrs | 590.00 Mtrs. | 3.00 Mtrs. | 2.05 Mtrs. |

| Sl. No. | Name of the Road | Classification | Width of the Road | Length of the Road | Footpath width | |
|---|---|---|---|---|---|---|
| | | | | | Left side | Right side |
| 14) | High Court to Dr.Ambedkar Veedhi | B.T. | 12.00 Mtrs. | 180.00 Mtrs. | 2.60 Mtrs. | 2.60 Mtrs. |
| 15) | In front of High Court. | B.T. | 13.60 Mtrs. | 270.00 Mtrs. | - | 2.30 Mtrs. |
| 16) | Read side of High Court. | B.T. | 8.10 Mtrs. | 350.00 Mtrs. | - | - |
| 17) | Behind Tennis Stadium | B.T. | 5.50 Mtrs. | 600.00 Mtrs. | - | - |
| 18) | Inside Balbhavan | B.T. | 9.00 Mtrs. | 600.00 Mtrs. | - | - |
| 19) | Read side of Library | -BM | 7.20 Mtrs. | 100.00 Mtrs. | - | - |
| 20) | Small Fountain to M.G.Road | S.T. | 7.60 Mtrs. | 450.00 Mtrs. | 1.50 Mtrs. | 2.00 Mtrs. |
| 21) | Library to Fairy Fountain. | " | 6.40 Mtrs. | 220.00 Mtrs. | - | - |
| 22) | Press Club to K.G.I.D. | B.T. | 6.70 Mtrs. | 100.00 Mtrs. | - | - |
| 23) | K.G.I.D. Circle. | " | 10.50 Mtrs. | 160.00 Mtrs. | 2.40 Mtrs. | 2.10 Mtrs. |
| 24) | Fairy Fountain to small Fountain | " | 7.75 Mtrs. | 300.00 Mtrs. | 2.00 Mtrs. | 2.00 Mtrs. |
| 25) | Small Fountain circle | " | 11.35 Mtrs. | 75.00 Mtrs. | - | - |
| 26) | Library to Century Club. | " | 7.50 Mtrs. | 100.00 Mtrs. | - | - |

Assistant Executive Engineer,
Special Sub-Division, High Court.

P.R. 618

**ಕೃಷಿ ಇಲಾಖೆ**

**ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1**

**ಹರಾಜು ಪ್ರಕಟಣೆ**

**ಸಂಖ್ಯೆ/ಗಯವಿ/ದಾಸ್ತಾನು ಪರಿಶೀಲನೆ – ವಿಲೇವಾರಿ/36/07–08, ದಿನಾಂಕ: 26ನೇ ಸೆಪ್ಟೆಂಬರ್ 2007**

**ವಿಷಯಃ** ಕೃಷಿ ಆಯುಕ್ತಾಲಯದ ಗಣಕಯಂತ್ರ ವಿಭಾಗದ ಅನುಪಯುಕ್ತ ಗಣಕಯಂತ್ರ, ಪ್ರಿಂಟರ್ ಮತ್ತು ಯು.ಪಿ.ಎಸ್. ವಸ್ತುಗಳ ವಿಲೇವಾರಿ ಬಗ್ಗೆ.

ಕೃಷಿ ಆಯುಕ್ತಾಲಯ, ನಂ.1, ಶೇಷಾದ್ರಿ ರಸ್ತೆ, ಬೆಂಗಳೂರು-1 ಇಲ್ಲಿನ ಗಣಕಯಂತ್ರ ವಿಭಾಗದ ಅನುಪಯುಕ್ತ ಗಣಕಯಂತ್ರ, ಪ್ರಿಂಟರ್ ಮತ್ತು ಯು.ಪಿ.ಎಸ್ ಉಪಕರಣ / ಯಂತ್ರಗಳನ್ನು ದಿನಾಂಕ: 31.10.2007 ರಂದು ಬೆಳಿಗ್ಗೆ 11.00 ಗಂಟೆಗೆ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು.

ವಿಲೇವಾರಿ ಆಗಲಿರುವ ದಾಸ್ತಾನು ವಿವರ ಪಟ್ಟಿ ಅನುಬಂಧದಲ್ಲಿದೆ. ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸಬಹುದಾಗಿದ್ದು ಇದನ್ನು ಸಾರ್ವಜನಿಕ ಗಮನಕ್ಕೆ ತರಲಾಗಿದೆ.

**ಷರತ್ತುಗಳು:**

1. ಅನುಪಯುಕ್ತ ಉಪಕರಣ/ವಸ್ತುಗಳನ್ನು ಇವು ಇರುವ ಸ್ಥಿತಿಯಲ್ಲೇ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
2. ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಹರಾಜಿಗೆ ಮುನ್ನ ರೂ. 3000.00 ಠೇವಣಿ ಹಣವನ್ನು ಕಛೇರಿಗೆ ಪಾವತಿಸತಕ್ಕದ್ದು.
3. ಠೇವಣಿ ಹಣ ಪಾವತಿಸಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಬಹುದಾಗಿದೆ.
4. ಹರಾಜು ಅಖೈರು ಆದ ಕೂಡಲೇ ಯಶಸ್ವಿ ಬಿಡ್ಡುದಾರರು ಬಿಡ್ಡಿನ ಶೇ 25ರ ಮೊಬಲಗನ್ನು ತೆರಿಗೆಗಳ ಸಹಿತ ಸ್ಥಳದಲ್ಲಿಯೇ ಪಾವತಿಸಬೇಕಾಗಿರುತ್ತದೆ. ಕೃಷಿ ನಿರ್ದೇಶಕರಿಂದ ವಿಲೇವಾರಿ ಆದೇಶ ಅನುಮೋದನೆಗೊಂಡ ನಂತರ ಉಳಿದ ಶೇ 75ರ ಮೊಬಲಗನ್ನು ತೆರಿಗೆಗಳ ಸಹಿತ ಪಾವತಿಸಲು ಪತ್ರ ಮುಖೇನ ತಿಳಿಸಲಾಗುವುದು ಪೂರ್ತಿ ಹಣ ಪಾವತಿಯಾದ ನಂತರ ಅನುಪಯುಕ್ತ ಉಪಕರಣ / ವಸ್ತುಗಳನ್ನು ತೆಗೆದುಕೊಂಡು ಹೋಗಲು ಅನುಮತಿ ನೀಡಲಾಗುವುದು.
5. ಹರಾಜು ಪ್ರಕ್ರಿಯೆ ತಿರಸ್ಕರಿಸುವ ಮುಂದೂಡುವ ಅಥವಾ ರದ್ದುಗೊಳಿಸುವ ಹಕ್ಕನ್ನು ಕೃಷಿ ನಿರ್ದೇಶಕರವರು ಕಾಯ್ದಿರಿಸಿಕೊಂಡಿರುತ್ತಾರೆ.

ಹರಾಜಿನ ಗಣಕಯಂತ್ರ, ಪ್ರಿಂಟರ್ ಮತ್ತು ಯು.ಪಿ.ಎಸ್ ಉಪಕರಣ / ಯಂತ್ರಗಳನ್ನು ಸಾರ್ವಜನಿಕರು ಕಛೇರಿ ವೇಳೆಯಲ್ಲಿ ಬೆಳಿಗ್ಗೆ 10-00 ರಿಂದ ಸಾಯಂಕಾಲ 5.00 ರವರೆಗೆ ಗಣಕಯಂತ್ರ ವಿಭಾಗದಲ್ಲಿ ವೀಕ್ಷಿಸಬಹುದಾಗಿರುತ್ತದೆ.

ಕೃಷಿ ನಿರ್ದೇಶಕರ ಪರವಾಗಿ

**ANNEXURE**

| Sl. No. | Description | Quantity / Weight | Date of Purchase | Book Value |
|---|---|---|---|---|
| 1 | Work Chair cush & arm | 1 | 25.7.90 | 1,996.00 |
| 2 | Powerone 5 KVS | 1 | 29.3.95 | 1,48,148.00 |
| 3 | Techser 1KVA online | 1 | 19.1.97 | 37,224.00 |
| 4 | Techser 1KVA online | 1 | 19.1.97 | 37,224.00 |

| Sl. No. | Description | Quantity / Weight | Date of Purchase | Book Value |
|---|---|---|---|---|
| 5 | Techser 1KVA online | 1 | 17.12.97 | 37,224.00 |
| 6 | Numeric 1 KVA | 6 | 22.12.99 | 1,81,360.00 |
| 7 | TVSE Start UPS 0.5 KVA | 3 | 6.8.2002 | 10,500.00 |
| 8 | Phoebus 0.5 KVA | 1 | 92-93 | 9000.00 |
| 9 | 2 KVA Krykard | 1 | 92-93 | 9950.00 |
| 10 | Phoebus 1 KVA | 1 | 92-93 | 14,500.00 |
| 11 | Exide Battery | 1 | 9.6.97 | 10,000.00 |
| 12 | Max UPS with 2 Batteries | 2 | 92-93 | 1417.00 |
| 13 | 0.5 KVA UPS/Inverter | 3 | 92-93 | approx. 3,000.00 |
| 14 | Wipro 6820 12 MB RAM console - SCSI controller FDD/uniplus | 1 | 9.3.89 | 2,07,801.00 |
| 15 | Wipro PC 8 Mhz / 250KB RAM Monochrome | 4 | 9.3.89 | 88,914.00 |
| 16 | 1 PCAT 486 Dx2 PCI/ISA/AUS/CPUC 80 486 D2-66Mhz/16 MB RAM/25 GB Cache Memory/1x1 44MB FDD/ 1x1.2 MB FDD 1x540 160 MB HDD1 32.bit PC - 1 IDC connectivity cord with Mouse | 1 | 30.3.96 | 59,000.00 |
| 17 | Armada Laptop Computer - Note Book | 1 | 2.12.96 | 1,35,300 |
| 18 | Penitum CPU 100 Mhz 256 Mb cache / 16 MB RAM 1 x 1.44 MB FDD 1 x 1.2 MB FDD/1.x 1 GB 32 Bit SVGA Colour Monitor 1020x468x250 PCI / VGA Card within 2 MB | 1 | 29.3.97 | 55,100.00 |
| 19 | Scanner (HP Scanjet) | 1 | 18.9.2000 | 29,868.00 |
| 20 | PCAT 386 ET&T | 5 | March 93 | 5,75,695.00 |
| 21 | WIPRO terminal extender | 1 | 92-93 | 1,000.00 |
| 22 | HP Laserjet Printer Model No. 2100 EST Section | 1 | 92-93 | 8,000.00 |
| 23 | Colour Laserjet Printer Model No. 4500 | 1 | 92-93 | 10,000.00 |
| 24 | Vomex Power lock scanner | 1 | 92-93 | 5,000.00 |
| 25 | Slide Projector | 1 | 92-93 | 13,000.00 |
| 26 | HP Printer Model No. 3535 | 1 | 92-93 | 2712.00 |
| 27 | H.P.Deskjet Printer Model No. 890C | 1 | 92-93 | 5,000.00 |
| 28 | Dot Matrix Printer LQ 1050 | 1 | 29.3.97 | 20,000.00 |
| 29 | Laser Printer Model 4010 | 1 | 9.3.97 | 1,04,040.00 |
| 30 | L&T Printer | 1 | 92-93 | approx. 8,000.00 |
| 31 | Windows NT 25 Users Vr.4.0 | 1 | 17.10.2000 | 84,107.00 |
| 32 | M-demon Vr.3.2 | 1 | 2.2.2001 | 28,000.00 |
| 33 | MS Proxy Server | 1 | 5.10.2000 | 19,373.00 |
| 34 | Symantec Norton Anti Virus | 1 | 17.1.2003 | 7,800.00 |

P.R. 616 Director of Agriculture

**ಅರಣ್ಯ ಇಲಾಖೆ**

**ಅರಣ್ಯ ಸಂರಕ್ಷಣಾಧಿಕಾರಿಗಳ ಕಚೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ.**

**ಅಧಿಸೂಚನೆ**

**ಸಂಖ್ಯೆ: ಎ1:ಇಎಸ್‌ಟಿಸಿಬ್ಬಂದಿ:ಅರಣ್ಯ ವೀಕ್ಷಕ:ವಿವ–75/2007-08, ದಿನಾಂಕ : 05ನೇ ಅಕ್ಟೋಬರ್ 2007**

ವಿಷಯ : 2007–08 ನೇ ಸಾಲಿನಲ್ಲಿ ಶಿವಮೊಗ್ಗ ಅರಣ್ಯ ವೃತ್ತದಲ್ಲಿ ಅರಣ್ಯ ವೀಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

ಉಲ್ಲೇಖ : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಇವರ ಕಚೇರಿ ಪತ್ರ ಸಂಖ್ಯೆ ಬಿ9: ನೇಮಕಾತಿ:ವಿವ–2/2006–07 ದಿನಾಂಕ 05–09–2007

ಅರಣ್ಯ ಇಲಾಖೆಯ ಶಿವಮೊಗ್ಗ ವೃತ್ತದಲ್ಲಿ ಅರಣ್ಯ ವೀಕ್ಷಕರ ಹುದ್ದೆಗಳಿಗೆ ನೇರ ನೇಮಕಾತಿಗಾಗಿ ಪುರುಷ ಮತ್ತು ಮಹಿಳಾ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ. ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿದ ಅರ್ಜಿಗಳನ್ನು **"ಅರಣ್ಯ ವೀಕ್ಷಕರ ಹುದ್ದೆಗೆ ಅರ್ಜಿ"** ಯೆಂದು ಲಕೋಟೆಯ ಮೇಲೆ ಬರೆದು ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಹೊಳೆಹೊನ್ನೂರು ರಸ್ತೆ, ಶಿವಮೊಗ್ಗ 577 203 ಇಲ್ಲಿಗೆ ದಿನಾಂಕ: 26–10–2007 ರಂದು ಅಪರಾಹ್ನ 05–30 ಗಂಟೆಗೆ ಅಥವಾ ಅದಕ್ಕಿಂತ ಮುಂಚಿತವಾಗಿ ತಲುಪಿಸತಕ್ಕದ್ದು. ಅರ್ಜಿಗಳನ್ನು ಸಾಧಾರಣ ಅಂಚೆ ಮೂಲಕ ಅಥವಾ ಮುದ್ದಾಂ ಆಗಿ ಸಲ್ಲಿಸಬಹುದು. ಸ್ವೀಕರಿಸಲಾದ ಅರ್ಜಿಗಳಿಗೆ ಯಾವುದೇ ತರಹದ ಸ್ವೀಕೃತಿ ಪತ್ರ ನೀಡಲಾಗುವುದಿಲ್ಲ. **ಎಲ್ಲಾ ವರ್ಗದ ಅರ್ಜಿದಾರರಿಗೆ ಅರ್ಜಿ ಶುಲ್ಕವಿರುವುದಿಲ್ಲ.** ಅರ್ಜಿ ನಮೂನೆಗಳನ್ನು ಇಲಾಖಾ ವತಿಯಿಂದ ತಯಾರಿಸಿ ಮಾರಾಟ ಅಥವಾ ಸರಬರಾಜು ಮಾಡಲಾಗುವುದಿಲ್ಲ. ಅರ್ಜಿದಾರರು ಅರ್ಜಿ ನಮೂನೆಗಳನ್ನು ಬೆರಳಚ್ಚು ಮಾಡಿಸಿ ಅಥವಾ ಗಣಕ ಯಂತ್ರದಲ್ಲಿ ಅಚ್ಚು ಮಾಡಿಸಿ ಅರ್ಜಿ ಸಲ್ಲಿಸಬಹುದು.

**ಅರ್ಜಿ ನಮೂನೆಯ ಮಾದರಿಯನ್ನು ಅಧಿಸೂಚನೆಯೊಂದಿಗೆ ಪ್ರತ್ಯೇಕವಾಗಿ ಲಗತ್ತಿಸಿದೆ.**

**ಒಟ್ಟು ಹುದ್ದೆಗಳು : 08**

**ವೇತನ ಶ್ರೇಣಿ: 5200–100–6000–125–6500–150–7100–175–7800–200–8200**

**ಹುದ್ದೆಗಳ ಮೀಸಲಾತಿ ವರ್ಗೀಕರಣ**

**I. ಶಿವಮೊಗ್ಗ ವಿಭಾಗ – 02 ಹುದ್ದೆಗಳು:**

| ಮೀಸಲಾತಿಯ ವರ್ಗ | ವಿವಿಧ ಸಮತಳ ಮೀಸಲಾತಿ ವಿವರ | | | | | | | | |
|---|---|---|---|---|---|---|---|---|---|
| | ಸಾಮಾನ್ಯ ಅಭ್ಯರ್ಥಿ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ-I | ಪ್ರವರ್ಗ–II(A) | ಪ್ರವರ್ಗ-II(B) | ಪ್ರವರ್ಗ–III(A) | ಪ್ರವರ್ಗ–III(B) | ಒಟ್ಟು |
| ಸಾಮಾನ್ಯ ವರ್ಗ | - | - | - | 01 | - | - | - | - | 01 |
| ಗ್ರಾಮೀಣ ಅಭ್ಯರ್ಥಿ | 01 | - | - | - | - | - | - | - | 01 |
| **ಒಟ್ಟು :** | **01** | **-** | **-** | 01 | **-** | **-** | **-** | **-** | **02** |

**II. ವನ್ಯಜೀವಿ ವಿಭಾಗ, ಶಿವಮೊಗ್ಗ – 04 ಹುದ್ದೆಗಳು:**

| ಮೀಸಲಾತಿಯ ವರ್ಗ | ವಿವಿಧ ಸಮತಳ ಮೀಸಲಾತಿ ವಿವರ | | | | | | | | |
|---|---|---|---|---|---|---|---|---|---|
| | ಸಾಮಾನ್ಯ ಅಭ್ಯರ್ಥಿ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ-I | ಪ್ರವರ್ಗ–II(A) | ಪ್ರವರ್ಗ-II(B) | ಪ್ರವರ್ಗ–III(A) | ಪ್ರವರ್ಗ–III(B) | ಒಟ್ಟು |
| ಸಾಮಾನ್ಯ ವರ್ಗ | 02 | 01 | 01 | - | - | - | - | - | 04 |
| **ಒಟ್ಟು :** | **02** | **01** | **01** | **-** | **-** | **-** | **-** | **-** | **04** |

**III. ಭದ್ರಾವತಿ ವಿಭಾಗ – 02 ಹುದ್ದೆಗಳು:**

| ಮೀಸಲಾತಿಯ ವರ್ಗ | ವಿವಿಧ ಸಮತಳ ಮೀಸಲಾತಿ ವಿವರ | | | | | | | | |
|---|---|---|---|---|---|---|---|---|---|
| | ಸಾಮಾನ್ಯ ಅಭ್ಯರ್ಥಿ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಪ್ರವರ್ಗ-I | ಪ್ರವರ್ಗ–II(A) | ಪ್ರವರ್ಗ-II(B) | ಪ್ರವರ್ಗ–III(A) | ಪ್ರವರ್ಗ–III(B) | ಒಟ್ಟು |
| ಸಾಮಾನ್ಯ ವರ್ಗ | 01 | 01 | - | - | - | - | - | - | 02 |
| **ಒಟ್ಟು :** | **01** | **01** | **-** | **-** | **-** | **-** | **-** | **-** | **02** |

**ಅರ್ಹತೆ ಮತ್ತು ನಿಬಂಧನೆ:**

**(i). ಪೌರತ್ವ–**

ಈ ಕೆಳಗೆ ಕಾಣಿಸಿದ ವ್ಯಕ್ತಿಗಳು ಮಾತ್ರ ಈ ಅಧಿಸೂಚನೆಯಲ್ಲಿ ವಿವರಿಸಿದ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹರಾಗಿರುತ್ತಾರೆ.

ಅ) ಭಾರತದ ಪೌರ, (ಆ) ಭೂತಾನದ ಪ್ರಜೆ, (ಇ) ನೇಪಾಳದ ಪ್ರಜೆ, (ಈ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ 1962ರ ಜನವರಿ 1ನೇ ದಿನಾಂಕಕ್ಕೆ ಮೊದಲು ಭಾರತಕ್ಕೆ ಬಂದಿರುವ ಟಿಬೆಟಿಯನ್ ನಿರಾಶ್ರಿತರು.

ಉ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ ಪಾಕಿಸ್ಥಾನ, ಮಯನ್ಮಾರ್ (ಬರ್ಮಾ), ಶ್ರೀಲಂಕಾ, ಪೂರ್ವ ಆಫ್ರಿಕಾದ ರಾಷ್ಟ್ರಗಳಾದ, ಕೀನ್ಯಾ, ಉಗಾಂಡಾ, ತಾಂಜಾನಿಯಾ, ಸಂಯುಕ್ತ ಗಣರಾಜ್ಯ (ಹಿಂದಿನ ಟಾಂಗನಿಕಾ, ಜಂಜಿಬಾರ), ಝಾಬಿಯಾ, ಮಾಲವಿ, ಜೈರ್, ಇಥಿಯೋಪಿಯಾ ಅಥವಾ ವಿಯೆಟ್ನಾಂ ಗಳಿಂದ ವಲಸೆ ಬಂದ ಭಾರತೀಯ ಮೂಲದ ವ್ಯಕ್ತಿ. **('ಅ' ಯಿಂದ 'ಉ' ವರೆಗೆ ಕಾಣಿಸಿರುವ ಅಭ್ಯರ್ಥಿಯು ವಲಸೆ ಬಂದ ಬಗ್ಗೆ ಅವನು ವಾಸಿಸುವ ಜಿಲ್ಲಾ ಸರಹದ್ದಿನ ಜಿಲ್ಲಾಧಿಕಾರಿ/ಜಿಲ್ಲಾ ನ್ಯಾಯಾಧೀಶರಿಂದ ಪ್ರಮಾಣ ಪತ್ರ ಪಡೆದು ಒಪ್ಪಿಸಬೇಕು. ಇಲ್ಲದ ಪಕ್ಷದಲ್ಲಿ ನೇಮಕಾತಿಗೆ ಅರ್ಹನಾಗಿರುವುದಿಲ್ಲ).**

**(ii) ವಿದ್ಯಾರ್ಹತೆ –**

ಏಳನೇ ತರಗತಿ ಪಾಸಾಗಿರಬೇಕು.

